

ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರಿ

ಸಂಪುಟ: ೦೨ ಸಂಚಿಕೆ: ೦೧ ಏಪ್ರಿಲ್ ೨೦೧೫ ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್



**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/-
ಐದು ವರ್ಷಗಳ ಚಂದಾ
ರೂ. ೧೦೦/-

ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬-೦೫-೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com

## ಪ್ರೊ.ಷ ಶೆಟ್ಟರ್ - 80. ವಿಚಾರ ಗೌರವ ಮತ್ತು ಅಭಿನಂದನೆ

ಪ್ರೊ.ಷ ಶೆಟ್ಟರ್ - 80.ವಿಚಾರ ಗೌರವ ಮತ್ತು ಅಭಿನಂದನೆ ಕಾರ್ಯಕ್ರಮವನ್ನು ಭಾನುವಾರ ದಿನಾಂಕ 22ನೇ ಮಾರ್ಚ್ 2015 ರಂದು ಪ್ರತಿಷ್ಠಾನದ ಭವನದಲ್ಲಿ ನಡೆಸಲಾಯಿತು.ಈ ಕಾರ್ಯಕ್ರಮದಲ್ಲಿ ಪ್ರೊ.ಷ ಶೆಟ್ಟರ್ ರವರ ಮುಖ್ಯಕೃತಿಗಳ ಅವಲೋಕನವನ್ನು ನಾಡಿನ ಹೆಸರಾಂತ ವಿಮರ್ಶಕರಾದ ಡಾ.ಜಿ.ಬಿ ಹರೀಶ್, ಡಾ.ಎಚ್.ಎಸ್. ರಾಘವೇಂದ್ರರಾವ್ ಹಾಗೂ ಡಾ.ಓ.ಎಲ್. ನಾಗಭೂಷಣ ಸ್ವಾಮಿ ಯವರು ನಡೆಸಿಕೊಟ್ಟರು. ಸಭೆಯ ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷರಾದ ಪ್ರೊ.ಎಂ.ಎಚ್. ಕೃಷ್ಣಯ್ಯ ರವರು ವಹಿಸಿದ್ದರು.

ಸಭೆಗೆ ಸ್ವಾಗತ ಕೋರುತ್ತಾ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾ.ಪ್ರೊ. ಪಿ.ವಿ. ನಾರಾಯಣರವರು ಪ್ರೊ.ಷ. ಶೆಟ್ಟರ್ ರವರ ಸಾಧನೆಗಳು ಮತ್ತು ಕಾರ್ಯಕ್ರಮದ ಆಶಯಗಳನ್ನು ವಿವರಿಸಿದರು. ಪ್ರೊ.ಷ. ಶೆಟ್ಟರ್ ರವರನ್ನು ಸರಳವಾಗಿ ಸನ್ಮಾನಿಸಲಾಯಿತು.



ಡಾ. ಜಿ. ಬಿ. ಹರೀಶ್, ಉಪಸಂಪಾದಕರು, ಪ್ರಜಾವಾಣಿ ದಿನಪತ್ರಿಕೆ, ಅವರು ಪ್ರೊ. ಷ ಶೆಟ್ಟರ್ ರವರ 'ಶಂಗಂ ತಮಿಳಗಂ ಮತ್ತು ಕನ್ನಡ ನಾಡು ನುಡಿ' ಕೃತಿಯು ಬಗ್ಗೆ ಆಳವಾದ ವಿಮರ್ಶೆಯನ್ನು ಮಂಡಿಸಿದರು. ಅವರು ತಮ್ಮ ಉಪನ್ಯಾಸದಲ್ಲಿ ಕನ್ನಡದ ಭಾಷೆಯ ಬಗ್ಗೆ ತಮಿಳು ಭಾಷೆಯ ಪುರಾತನ ಕೃತಿಗಳಲ್ಲಿ ಕಂಡು ಬಂದಿರುವ ಉಲ್ಲೇಖಗಳನ್ನು ಉದಾಹರಣೆಗಳ ಸಹಿತ ವಿವರಿಸಿದರು.




ಪ್ರೊ.ಷ ಶೆಟ್ಟರ್ ರವರ 'ಹಳಗನ್ನಡ- ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ' ಕೃತಿಯ ಅವಲೋಕನವನ್ನು ನಾಡಿನ

5ನೇ ಪುಟಕ್ಕೆ

## ಸಂಪಾದಕೀಯ

**ಹೊಂಗನಸು**

ಇಡೀ ಕರ್ನಾಟಕದಲ್ಲಿ ನೂತನ ವಿನೂತನ ಸಾಹಿತ್ಯ ಚಟುವಟಿಕೆಗಳನ್ನು ಪ್ರತಿ ತಿಂಗಳೂ 5–6 ಕಾರ್ಯಕ್ರಮಗಳನ್ನು ನಿರಂತರವಾಗಿ ಹಮ್ಮಿಕೊಂಡು ಚೊಕ್ಕವಾಗಿ ನಡೆಸುತ್ತಾ ಬರುತ್ತಿರುವ ಕೆಲವೇ ಸಂಸ್ಥೆಗಳ ಪೈಕಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಒಂದು ಪ್ರಮುಖ ಸಂಸ್ಥೆ. ಪ್ರತಿಷ್ಠಾನವುಒಂದು ಜೋಳಿಗೆ ಸಂಸ್ಥೆಯಾಗಿದ್ದುಕೊಂಡೇ ಸಾಹಿತ್ಯಾಭಿಮಾನಿಗಳ ನೆರವಿನಿಂದ ವೈವಿಧ್ಯಮಯ ಕಾರ್ಯಕ್ರಮಗಳನ್ನು ನಡೆಸಲು ಸಾಧ್ಯವಾಗುತ್ತಿದೆ. ಕರ್ನಾಟಕ ಸರ್ಕಾರವು ಪ್ರತಿಷ್ಠಾನಕ್ಕೆ ಪ್ರತಿ ವರ್ಷ ರೂ ಹತ್ತು ಲಕ್ಷಗಳ ಅನುದಾನ ಈಗ್ಗೆ ಕೆಲವು ವರ್ಷಗಳಿಂದ ನೀಡುತ್ತಿತ್ತು. ಇಷ್ಟು ವರ್ಷ ಈ ಹಣವನ್ನು ಮಿತವಾಗಿ ಬಳಸಿಕೊಂಡು ಪ್ರತಿಷ್ಠಾನವು ಹತ್ತು ಹಲವು ಕಾರ್ಯಕ್ರಮಗಳನ್ನು ನಡೆಸಿಕೊಂಡು ಬರುತ್ತಿತ್ತು. ಈ ವರ್ಷ ಹಲವಾರು ಯೋಜನೆಗಳನ್ನು ಪ್ರಾರಂಭಿಸುವ ಉದ್ದೇಶದಿಂದ ಪ್ರತಿಷ್ಠಾನವು ಸುಮಾರು ರೂ.70 ಲಕ್ಷಗಳ ಪ್ರಸ್ತಾವನೆಗಳನ್ನು ಸಲ್ಲಿಸಿತ್ತು. ಇಂತಹ ಸನ್ನಿವೇಶದಲ್ಲಿ ಕರ್ನಾಟಕ ಸರ್ಕಾರವು ಯಾವುದೇ ಕಾರಣ ನೀಡದೇ ಯಾವುದೇ ಮುನ್ಸೂಚನೆಯನ್ನೂ ನೀಡದೇ ಏಕಾಏಕಿ ಪ್ರತಿಷ್ಠಾನಕ್ಕೆ ನೀಡುತ್ತಿದ್ದ ಮೊತ್ತವನ್ನು ಅರ್ಧ ಮಟ್ಟಕ್ಕೆ ಕಡಿತಗೊಳಿಸಿ ಕೇವಲ ರೂ. ಐದು ಲಕ್ಷವನ್ನು ಮಾತ್ರ ಮಂಜೂರು ಮಾಡಿರುತ್ತದೆ.

ಪ್ರತಿಷ್ಠಾನವು ಈ ಬಗ್ಗೆ ಸರ್ಕಾರದ ಕನ್ನಡ ಸಂಸ್ಕೃತಿ ಇಲಾಖೆಗೆ ಪತ್ರವನ್ನು ಬರೆದಿರುತ್ತದೆ. ಅನುದಾನದ ಮೊತ್ತವನ್ನು ಕಡಿತ ಮಾಡದೇ ಪೂರ್ಣ ಮೊತ್ತ ಲಭ್ಯವಾಗಬಹುದೆಂಬ ಆಶ್ವಾಸನೆ ನೀಡಲಾಗಿರುತ್ತದೆ. ಆದರೆ ಪ್ರತಿಷ್ಠಾನದ ಬಗ್ಗೆ ಈ ರೀತಿಯ ಧೋರಣೆಯನ್ನು ಸರ್ಕಾರವು ತಳೆದಿರುವುದರ ಬಗ್ಗೆ ಹಲವಾರು ಹಿರಿಯ ವಿದ್ವಾಂಸರು ಹಾಗೂ ಸಾಹಿತಿಗಳು ಬೇಸರ ವ್ಯಕ್ತಪಡಿಸಿರುತ್ತಾರೆ.

ಪ್ರತಿಷ್ಠಾನದ ಚಟುವಟಿಕೆಗಳ ಬಗ್ಗೆ ಹಾಗೂ ಹೊಂಗನಸು ವಾರ್ತಾಪತ್ರದ ಬಗ್ಗೆ ನಿಮ್ಮ ಅನಿಸಿಕೆಗಳನ್ನು ಒಂದು ಪುಟಕ್ಕೆ ಮೀರದಂತೆ ಬರೆದು ನಮಗೆ ಕಳುಹಿಸಿಕೊಡಿ. ಆಯ್ದ ಪತ್ರಗಳನ್ನ ಈ ವಾರ್ತಾಪತ್ರದಲ್ಲಿ ಪ್ರಕಟಿಸಲಾಗುವುದು.

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/– ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ, ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

ಬಿ. ಆರ್. ರವೀಂದ್ರನಾಥ್
ಸಂಪಾದಕರು

### ಏಪ್ರಿಲ್ 2015ರಲ್ಲಿ ಆಯೋಜಿಸಲಾದ ಕಾರ್ಯಕ್ರಮಗಳು

**ಕೆ ಪಿ ರಾವ್ ದತ್ತಿ ಕಾರ್ಯಕ್ರಮ**
15 ಏಪ್ರಿಲ್ 2015 ಬುಧವಾರ ಸಂಜೆ 6–00 ಗಂಟೆ
ಉಪನ್ಯಾಸ :ಶ್ರೀ ಶೈಲೇಶಚಂದ್ರ ಗುಪ್ತಾ
ವಿಷಯ :ಮಾಧ್ಯಮ ಕ್ಷೇತ್ರದ ವಿಕಲ್ಪಗಳು

16ಏಪ್ರಿಲ್ 2015 ಗುರುವಾರ ಸಂಜೆ 6–00 ಗಂಟೆ
**ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ**
ಸಾಕ್ಷ್ಯಚಿತ್ರ ಪ್ರದರ್ಶನ

25 ಏಪ್ರಿಲ್ 2015 ಶನಿವಾರ ಸಂಜೆ 6–00 ಗಂಟೆ
**ಸಿರಿ ಸಂಗೀತ ತಿಂಗಳ ಸಾಂಸ್ಕೃತಿಕ ಕಾರ್ಯಕ್ರಮ**
**ಭಕ್ತಿ ಗೀತೆಗಳು**
ಗಾಯಕರು: ಹಾ.ವಿ. ಮಂಜುಳಾ ಮತ್ತು ಸಂಗಡಿಗರು

26ಏಪ್ರಿಲ್ 2015 ಭಾನುವಾರ ಬೆಳಗ್ಗೆ 10–30 ಗಂಟೆ
**ಡಾ. ವಿಜಯಾ ಸುಬ್ಬರಾಜ್ ದತ್ತಿ ಪ್ರಶಸ್ತಿ ಪ್ರದಾನ**
ಪ್ರಶಸ್ತಿ ಪ್ರದಾನ : ಶ್ರೀ ಸಿ. ಎನ್. ರಾಮಚಂದ್ರ, ನಿರ್ದೇಶರು, ದೂರದರ್ಶನ ಕೇಂದ್ರ, ಚೆನ್ನೈ

### ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ನಮ್ಮ ಕಾರ್ಯಕ್ರಮಗಳನ್ನು ಯೂಟ್ಯೂಬ್ ನಲ್ಲಿ ವೀಕ್ಷಿಸಲು ನೀವು ಮಾಡಬೇಕಾದುದು ಇಷ್ಟೇ:

ಜಾಲತಾಣ www.youtube.com ಕ್ಕೆ ಭೇಟಿ ನೀಡಿ bmsri ಎಂದು ಟೈಪ್ ಮಾಡಿ. ಕೂಡಲೆ ನಾವು ಅಪ್ ಲೋಡ್ ಮಾಡಿರುವ ಎಲ್ಲಾ ಕಾರ್ಯಕ್ರಮಗಳು ಲಭ್ಯವಾಗುತ್ತವೆ. ಒಮ್ಮೆ ಭೇಟಿ ನೀಡಿ ನಿಮ್ಮ ಅಮೂಲ್ಯ ಸಲಹೆಗಳನ್ನು ನೀಡಬೇಕು ಎಂದು ಕೋರುತ್ತೇವೆ.

# ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ಹಾಗೂ ಅನುವಾದ ಪ್ರಶಸ್ತಿಗಳ ಪ್ರದಾನ

ದಿನಾಂಕ 14ನೇ ಮಾರ್ಚ್ ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿಷ್ಠಿತ ಪ್ರಶಸ್ತಿಗಳಾದ ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ ಹಾಗೂ ಅನುವಾದ ಪ್ರಶಸ್ತಿಗಳನ್ನು ಪ್ರದಾನ ಮಾಡಲಾಯಿತು. ಈ ಪ್ರಪ್ರಥಮ ಪ್ರಶಸ್ತಿಗಳನ್ನು ವಿಜಯವಾಣಿ ದಿನಪತ್ರಿಕೆಯ ಸಂಪಾದಕರಾದ ಶ್ರೀ ಹರಿಪ್ರಕಾಶ ಕೋಣೆಮನೆಯವರು ಪ್ರದಾನ ಮಾಡಿದರು. ಶಾ. ಬಾಲೂರಾವ್ ಅನುವಾದ ಪ್ರಶಸ್ತಿಯನ್ನು ಡಾ. ತಿಪ್ಪೆಸ್ವಾಮಿಯವರು ಪಡೆದರು. ಶಾ. ಬಾಲೂರಾವ್ ಯುವ ಬರಹಗಾರ ಪ್ರಶಸ್ತಿಯನ್ನು ಶ್ರೀಮತಿ ಅಲಕಾ ಕಟ್ಟೆಮನೆಯವರು ಪಡೆದರು.

ಸಭೆಯ ಅಧ್ಯಕ್ಷತೆಯನ್ನು ಮೈಸೂರು ವಿಶ್ವವಿದ್ಯಾಲಯದ ಇಂಗ್ಲೀಷ್ ವಿಭಾಗದ ಪ್ರೊಫೆಸರ್ ಕೃಷ್ಣಮೂರ್ತಿ ಚಂದರ್ ರವರು ವಹಿಸಿದ್ದರು. ಕಾರ್ಯಕ್ರಮದ ಆರಂಭದಲ್ಲಿ ಶಾ. ಬಾಲೂರಾವ್ ರವರು ರಚಿಸಿದ ಉಗಾದಿ ಹಾಡನ್ನು ಡಾ.ನಳಿನಿ ಚಂದರ್ ರವರು ರಾಗ ಸಂಯೋಜನೆ ಮಾಡಿ ಸುಶ್ರಾವ್ಯವಾಗಿ ಹಾಡಿದರು. ಕಾರ್ಯಕ್ರಮದ ಸ್ವಾಗತ ಹಾಗೂ ಪ್ರಾಸ್ತಾವಿಕ ಭಾಷಣದಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ರವರು ಶಾ. ಬಾಲೂರಾವ್ ರ ಬಗ್ಗೆ ಹಾಗೂ ಈ ಎರಡೂ ಪ್ರಶಸ್ತಿಗಳ ಸಾಪನೆಯ ಹಿನ್ನಲೆಯನ್ನು ವಿವರಿಸಿ ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ರವರ ಔದಾರ್ಯತೆಯನ್ನು ಪ್ರಶಂಸಿದರು. ಜೊತೆಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು. ಪ್ರಶಸ್ತಿಗಳ ಭಾಜನರಾದ ಡಾ.ತಿಪ್ಪೆಸ್ವಾಮಿಯುವರು ಹಾಗೂ ಶ್ರೀಮತಿ ಅಲಕಾ ಕಟ್ಟೆಮನೆಯವರು ತಮ್ಮ ಅನಿಸಿಕೆಗಳನ್ನು ಹಂಚಿಕೊಂಡು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನಕ್ಕೆ ಹಾಗೂ ಶ್ರೀಮತಿ ಕಮಲಿನಿ ಶಾ. ಬಾಲೂರಾವ್ ರವರ ಔದಾರ್ಯತೆಗೆ ಧನ್ಯವಾದಗಳನ್ನು ಅರ್ಪಿಸಿದರು.



ಪ್ರಶಸ್ತಿ ಪ್ರದಾನ ಮಾಡಿದ ವಿಜಯವಾಣಿ ದಿನಪತ್ರಿಕೆಯ ಸಂಪಾದಕರಾದ ಶ್ರೀ ಹರಿಪ್ರಕಾಶ ಕೋಣೆಮನೆಯವರು ತಮ್ಮ ಭಾಷಣದಲ್ಲಿ ಕನ್ನಡ ಭಾಷೆಯನ್ನು ಬೆಳಸುವತ್ತ ಆಗಿರುವ ಕೆಲಸಗಳು ಹಾಗೂ ಇನ್ನೂ ಆಗಬೇಕಿರುವ ಕೆಲಸಗಳನ್ನು ನೆನಪಿಸಿಕೊಂಡು ವಿಜಯವಾಣಿ ದಿನಪತ್ರಿಕೆಯು ಈ ನಿಟ್ಟಿನಲ್ಲಿ ನಡೆಸುತ್ತಿರುವ ಅಭಿಯಾನಗಳು ಹಾಗೂ ಇತರ ಚಟುವಟಿಕೆಗಳ ಬಗ್ಗೆ ಹಲವಾರು ಹೊಸ ಹೊಸ ವಿಚಾರಗಳನ್ನು ಮಂಡಿಸಿದರು.



ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಪ್ರೊಫೆಸರ್ ಕೃಷ್ಣಮೂರ್ತಿ ಚಂದರ್ ರವರು ಶಾ. ಬಾಲೂರಾವ್ ರವರ ವಿದ್ವತ್ ಹಾಗೂ ಅವರ ಆತ್ಮೀಯತೆಗಳನ್ನು ನೆನಪಿಸಿಕೊಂಡು ಅವರಿಗೆ ಅನುವಾದದಲ್ಲಿ ಇದ್ದ ಆಸಕ್ತಿ ಹಾಗೂ ಪ್ರಭುತ್ವವನ್ನು ವಿವರಿಸಿದರು.

ಸಭೆಯಲ್ಲಿ ಶ್ರೀಮತಿ ಕಮಲಿನಿ ಶಾ. ಬಾಲೂರಾವ್, ಶ್ರೀಮತಿ ನಾಗರತ್ನ ಹಾಗೂ ಶಾ. ಬಾಲೂರಾವ್ ರವರ ಅಭಿಮಾನಿಗಳು ಹಾಗು ಪ್ರಶಸ್ತಿ ಪುರಸ್ಕೃತರ ಬಂಧುವರ್ಗಾವರು ಉಪಸ್ಥಿತರಿದ್ದರು.

ಕಾರ್ಯಕ್ರಮದ ನಿರೂಪಣೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌ.ಕಾರ್ಯದರ್ಶಿ ಪ್ರೊ.ಅಬ್ದುಲ್ ಬಶೀರ್ ರವರು ನಡೆಸಿಕೊಟ್ಟರು.

## ತೀನಂ ಶ್ರೀ ದತ್ತಿ ಉಪನ್ಯಾಸ ಸರಣಿ

ದಿನಾಂಕ 18ನೇ ಮಾರ್ಚ್ 2015ರಂದು ತೀನಂ ಶ್ರೀ ದತ್ತಿ ಉಪನ್ಯಾಸ ಸರಣಿಯ 4ನೇ ಹಾಗೂ ಕೊನೆಯಉಪನ್ಯಾಸವನ್ನು ಪ್ರೊ ಆ.ರಾ.ಮಿತ್ರ ರವರು 'ಪ್ರಬಂಧ, ಛಂದಸ್ಸು ಮತ್ತು ಭಾಷಾಶಾಸ್ತ್ರ ಕ್ಷೇತ್ರಗಳಿಗೆ ತೀನಂಶ್ರೀ ಅವರ ಕೊಡುಗೆ'ಎಂಬ ವಿಷಯದ ಬಗ್ಗೆ ನೀಡಿದರು.ಈ ವಿದ್ವತ್ ಪೂರ್ಣ ಉಪನ್ಯಾಸದಲ್ಲಿ ಪ್ರೊ.ತೀನಂಶ್ರೀ




ರವರ ಕೊಡುಗೆಯ ವೈಶಿಷ್ಟ್ಯಗಳನ್ನು ಉದಾಹರಣೆ ಸಹಿತವಾಗಿ ಸವಿಸ್ತಾರವಾಗಿ ವಿವರಿಸಿ ತೀನಂಶ್ರೀಯವರ ಪ್ರತಿಭೆಯ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲಿದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣರವರು ವಹಿಸಿದ್ದರು.

## ಪತ್ರಿಕಾ ಪ್ರಕಟಣೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ವಾರ್ಷಿಕವಾಗಿ ನೀಡುವ ಸೂವೆಂ ಅರಗ ವಿಮರ್ಶಾ ಪ್ರಶಸ್ತಿಗಾಗಿ ಕೃತಿಗಳನ್ನು ಆಹ್ವಾನಿಸಿದೆ. ಹತ್ತು ಸಾವಿರ ರೂಪಾಯಿ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು 2014 ನೆಯ ಸಾಲಿನ ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ಶ್ರೇಷ್ಠ ವಿಮರ್ಶಾ ಕೃತಿಯೊಂದಕ್ಕೆ ನೀಡಲಾಗುವುದು. ಲೇಖಕರು, ಪ್ರಕಾಶಕರು ಹಾಗೂ ಇತರರು 2014ನೆಯ ಸಾಲಿನ ಜನವರಿ–ಡಿಸೆಂಬರ್ ಅವಧಿಯಲ್ಲಿ ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡ ವಿಮರ್ಶಾ ಕೃತಿಯ ಒಂದು ಪ್ರತಿಯ ಜೊತೆ ಖಾಲಿ ಹಾಳೆಯಲ್ಲಿ ಅರ್ಜಿಯನ್ನು ಬರೆದು ಗೌರವ ಕಾರ್ಯದರ್ಶಿ, ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು ಇವರಿಗೆ ಕಳುಹಿಸಬೇಕು. ಅರ್ಜಿಯನ್ನು ಸಲ್ಲಿಸಲು ಕೊನೆಯ ದಿನಾಂಕ 30ನೇ ಏಪ್ರಿಲ್ 2015

# ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

## 2013 ಮತ್ತು 2014 ಸಾಲುಗಳಲ್ಲಿ ಪ್ರಕಟವಾದ ಪ್ರತಿಷ್ಠಾನದ ಪ್ರಕಟಣೆಗಳ ಪಟ್ಟಿ

| | ಶೀರ್ಷಿಕೆ | ಲೇಖಕ/ಸಂಪಾದಕ |
|---|---|---|
| 1 | ಶ್ರೀಕೃಷ್ಣದೇವರಾಯನ ದಿನಚರಿ | ಎಂ.ವಿ.ಸೀತಾರಾಮಯ್ಯ, ವಿ.ಎಸ್.ಎಸ್.ಆಚಾರ್ಯ |
| 2 | ಇಂಗ್ಲಿಷ್ ಗೀತಗಳು ಮೂಲ ಆಂಗ್ಲಕವನಗಳೊಂದಿಗೆ | ಮೂಲ; ಬಿ.ಎಂ.ಶ್ರೀ. ಸಂ. : ಎಲ್.ಎಸ್ ಶೇಷಗಿರಿರಾವ್ |
| 3 | ಎಂ.ವಿ.ಸೀತಾರಾಮಯ್ಯ:ಜೀವನ ಮತ್ತು ಸಾಹಿತ್ಯ | ಎಂ.ಎಸ್.ಭಾಸ್ಕರ್ |
| 4 | ಪ್ರೊ.ಡಿ.ಲಿಂಗಯ್ಯ:ಜೀವನ ಮತ್ತು ಸಾಹಿತ್ಯ ಸಾಧನೆ | ವಿವಿಧ ಲೇಖಕರು |
| 5 | ಸಿರಿಕಂಟ | ಎನ್.ಬಸವಾರಾಧ್ಯ, ನಾ.ಗೀತಾಚಾರ್ಯ |
| 6 | ಹಸ್ತಪ್ರತಿ ಅಧ್ಯಯನ ಸಮಾವೇಶ ಸಂ.2 | ಸುಂಕಂ ಗೋವರ್ಧನ |
| 7 | ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ನಾಡು ನುಡಿ ಚಿಂತನ | ಕಾ.ವೆಂ.ಶ್ರೀನಿವಾಸಮೂರ್ತಿ |
| 8 | ಹಳತು –ಹೊನ್ನು | ಕೆ.ಎಸ್.ಮಧುಸೂದನ |
| 9 | ಪರಿಷ್ಕೃತ ಹೊಸಗನ್ನಡ ವ್ಯಾಕರಣ | ಟಿ.ವಿ.ವೆಂಕಟಾಚಲಶಾಸ್ತ್ರಿ |
| 10 | ಸಾಹಿತ್ಯೋಪಾಸಕರು | ಪಿ.ವಿ.ನಾರಾಯಣ, ಎಸ್.ವಿ.ಶ್ರೀನಿವಾಸರಾವ್ |
| 11 | ಸಾರ್ಥಕ ಬದುಕಿನ ಶತಾಯುಷಿ ಪ್ರೊ.ಮಳಗಿ | ವಿಜಯಾ ಸುಬ್ಬರಾಜ್ |

ಮೊದಲನೇ ಪುಟದಿಂದ

ಪ್ರಸಿದ್ಧ ವಿಮರ್ಶಕರಾದ ಡಾ.ಎಚ್.ಎಸ್. ರಾಘವೇಂದ್ರರಾವ್ ರವರು ನಡೆಸಿ ಹಲವಾರು ಗಹನವಾದ ವಿಚಾರಗಳನ್ನು ಮಂಡಿಸಿದರು.



ಪ್ರೊ.ಷ ಶೆಟ್ಟರ್ ರವರ 'ಸಾವನ್ನು ಅರಸಿ' ಮೂಲ ಇಂಗ್ಲಿಷ್ ಕೃತಿಯನ್ನು ಕನ್ನಡಕ್ಕೆ ಅನುವಾದಿಸಿರುವ ಡಾ. ಒ.ಎಲ್. ನಾಗಭೂಷಣ ಸ್ವಾಮಿ ಯವರು ಈ ಪುಸ್ತಕದ ವೈಶಿಷ್ಟ್ಯಗಳನ್ನು ಉದಾಹರಣಾ ಸಹಿತವಾಗಿ ವಿವರಿಸಿದರು. ಸಾವನ್ನು ಎದುರುಗೊಳ್ಳಲು ಸಿದ್ದರಾಗಿ ಶ್ರವಣಬೆಳಗೊಳಕ್ಕೆ ಬಂದ ಜೈನ ಭಕ್ತರು ಬರುವುದು ಹಾಗೂ ನಂತರದ ಬೆಳವಣಿಗೆಗಳು ಇವುಗಳನ್ನು ಶಾಸನಗಳ ಅಧ್ಯಯನದ ಮೂಲಕ ಹೊರ ತಂದಿರುವ ಪ್ರೊ.ಷ ಶೆಟ್ಟರ್ ರವರನ್ನು ಅಭಿನಂದಿಸಿದರು.



ಪ್ರೊ.ಷ ಶೆಟ್ಟರ್ ರವರು ತಮ್ಮ ಭಾಷಣದಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಂಡು ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಲ್ಲಿ ಮಾಡಿದ ಕೆಲಸಗಳು ಹಾಗೂ ತಾವು ರಚಿಸಿದ ಇತರ ಪುಸ್ತಕಗಳ ಬಗ್ಗೆ ಹಾಗೂ ತಮ್ಮ ವಿಶಿಷ್ಟ ಅನುಭವಗಳ ಬಗ್ಗೆ ತಿಳಿಸಿಕೊಟ್ಟರು.



ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷರಾದ ಪ್ರೊ.ಎಂ.ಎಚ್. ಕೃಷ್ಣಯ್ಯ ರವರುಪ್ರೊ.ಷ ಶೆಟ್ಟರ್ ರವರ ಸಾಧನೆಗಳ ಬಗ್ಗೆ ನೆನಪಿಸಿಕೊಂಡು ತಮ್ಮ ವಿಚಾರಗಳನ್ನು ಮಂಡಿಸಿದರು.

## ಶ್ರೀ ಸೋಸಲೆ ಅಯ್ಯಾಶಾಸ್ತ್ರಿ ದತ್ತಿ ಉಪನ್ಯಾಸ

ದಿನಾಂಕ 25ನೇ ಮಾರ್ಚ್ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಎಪಿಎಸ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಡಾ. ಎಚ್.ಎನ್. ಮುರಳೀಧರ ರವರು ಕನಕದಾಸರ ಕಾಯಮೀಮಾಂಸೆಎಂಬ ವಿಷಯದ ಬಗ್ಗೆ ಶ್ರೀ ಸೋಸಲೆ ಅಯ್ಯಾಶಾಸ್ತ್ರಿ ದತ್ತಿ ಉಪನ್ಯಾಸ ಕಾರ್ಯಕ್ರಮದಡಿಯಲ್ಲಿ ಉಪನ್ಯಾಸ ನೀಡಿದರು.ಅವರು ತಮ್ಮ ಉಪನ್ಯಾಸದಲ್ಲಿ ಕನಕದಾಸರು ಶರೀರದ ಬಗ್ಗೆ ಪ್ರತ್ಯೇಕವಾಗಿ ಒಂದು ಮೀಮಾಂಸೆಯನ್ನು ಮಂಡಿಸಿದ್ದು ದಾಸ ಪರಂಪರೆಯಲ್ಲಿ ಅವರು ಇತರ ದಾಸರಿಗೆ ಹೋಲಿಸಿದರೆ ಭಿನ್ನವಾದ ನಿಲುವನ್ನು ತಾಳಿದ್ದರ ಬಗ್ಗೆ ಹಲವಾರು ಉದಾಹರಣೆಗಳನ್ನು ನೀಡಿ ತಮ್ಮ ವಿಚಾರಗಳನ್ನು ಮಂಡಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣರವರು ವಹಿಸಿದ್ದರು. ಅವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಅವರು 19ನೇ ಶತಮಾನದ ಅಂತ್ಯದಲ್ಲಿ ರಾಜಗೀತೆಯನ್ನು ರಚಿಸಿದ ಸೋಸಲೆ ಅಯ್ಯಾಶಾಸ್ತ್ರಿಯವರ ಸಾಧನೆ ಹಾಗೂ ಅವರ ಹೆಸರಿನಲ್ಲಿ ದತ್ತಿಯನ್ನು ಸ್ಥಾಪಿಸಿದ ಗರ್ಗೇಶ್ವರಿಯ ವೆಂಕಟಸುಬ್ಬಯ್ಯರವರನ್ನು ಸ್ಮರಿಸಿಕೊಂಡರು.

**ಪ್ರತಿ ತಿಂಗಳ ಸಿರಿಸಂಗೀತ ದಿನಾಂಕ 28ನೇ ಮಾರ್ಚ್ 2015**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿ ತಿಂಗಳ ಸಿರಿಸಂಗೀತ ಕಾರ್ಯಕ್ರಮದಡಿಯಲ್ಲಿ ಶ್ರೀಮತಿ ಕುಮುದ ಗೋವಿಂದರಾವ್ ಮತ್ತು ಸಂಗಡಿಗರು ಭಕ್ತಿ ಗೀತೆಗಳ ಗಾಯನ ನಡೆಸಿಕೊಟ್ಟರು.



# ಪುಸ್ತಕ ಪರಿಚಯ

ಸತ್ಯ ನಾರಾಯಣರಾವ್ (ಹೂ. ರಾ) ಸಂ.

**ಕವಿಗಳು ಕಂಡ ಬಿ.ಎಂ.ಶ್ರೀ : ವಿವಿಧ ಕವಿಗಳ ಕವನ ಸಂಕಲನ**

ಪು. xii+100 ಬೆಲೆ ರೂ 80/- 2012

ಆಚಾರ್ಯ ಬಿ.ಎಂ.ಶ್ರೀ ಯವರ ಮೇರು ವ್ಯಕ್ತಿತ್ವ, ಪಾಂಡಿತ್ಯ, ಸೃಜನ ಶೀಲತೆ, ಕಲ್ಪನಾಶ್ರೀಮಂತಿಕೆ, ಅಸಾಧಾರಣ ಸಾಹಿತ್ಯ ಸೃಷ್ಟಿ ಅನುಪಮ, 'ಶ್ರೀ' ಯವರುಬರೆದದ್ದು ಕಡಿಮೆ ಆದರೆ ಅವರ ಕಾವ್ಯ, ನಾಟಕ, ಗದ್ಯ ಬರಹ, ಮುಂದಿನ ವೇಳೆಗೆಗೆ ಮಾರ್ಗದರ್ಶಿಯಾಗಿತ್ತು.'ಬಿ. ಎಂ.ಶ್ರೀ ಯವರನ್ನು ಕುರಿತುಹಿರಿಯ ಕಿರಿಯ ಕವಿಗಳಿಂದ ರಚಿತವಾದ ಆಯ್ದ ಅತಿ ಕವನಗಳ ಸಂಗ್ರಹ ಈ ಕೃತಿ.

ಆಂಗಯ್ಯ ಡಿ

**ಕನ್ನಡ ನವೋದಯ ಪ್ರವರ್ತಕ ಬಿ.ಎಂ. ಶ್ರೀಕಂಠಯ್ಯ:**

ವ್ಯಕ್ತ ಪರಿಚಯ ಮತ್ತು ಸೂಕ್ತಗಳು (ಎರಡನೇ ಮುದ್ರಣ) [ಪ್ರಥಮ ಮುದ್ರಣ 2005]

ಪು.50 ಬೆಲೆ ರೂ. 30/- 2012

ಬಿ. ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಬೆಳ್ಳೂರು ಶಾಖೆಯ ಮಹಾಪೋಷಕರಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಡು ಸ್ವಾಮಿಯವರ ಆತಯದಂತೆ ರಚಿಸಿರುವ ಕಿರು ಪುಸ್ತಕ ಇದು. ಬಿ. ಎಂ.ಶ್ರೀಯವರನ್ನು ಕುರಿತು ಸಂಕ್ಷಿಪ್ತವಾದ ವಿದ್ವತ್ ಪೂರ್ಣ ಲೇಖನವಲ್ಲದೆ.ಅವರ ಆಯ್ದ ಸೂಕ್ತಗಳು ಜೀವನ ದು...ಮೈಲಿಗಲ್ಲುಗಳು ಹಾಗೂ ಅವರ ಕೃತಿಗಳ ಮಾಹಿತಿ ಒದಗಿಸಲಾಗಿದೆ.

**ಶ್ರೀ ಕೃಷ್ಣ ದೇವರಾಯನ ದಿನಚರಿ.**

(ಪ್ರಧಾನ ಸಂಪಾದಕರು : ಎಂ. ವಿ. ಸೀತಾರಾಮಯ್ಯ)

ಪು.92 ಬೆಲೆ ರೂ. 80/- 2013

ದೇಶದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಇತಿಹಾಸ ರಚನೆಯಲ್ಲಿ ಶಿಲಾಶಾಸನಗಳು, ನಾಣ್ಯಗಳು, ಮಾಸ್ತಿ ವೀರಗಲ್ಲುಗಳು, ತಾದವೋಲೆ, ಭೂಜಗ ಪತ್ರ, ಪ್ರಾಚೀನ ಹಸ್ತ ಪ್ರತಿಗಳು, ಬಖೈರುಗಳೂ ಇತ್ಯಾದಿಗಳ ಪಾತ್ರೆ ಗುರುತರವಾದದ್ದು, ವಿಜಯನಗರ ಕೃಷ್ಣ ದೇವರಾಯನ ದಿನಚರಿಯ ವಿವರಗಳನ್ನು ತಾಳೆಗರಿ ಹಸ್ತ ಪ್ರತಿಯಲ್ಲಿ ನಮೂದಿಸಲಾಗಿತ್ತು. ಇದನ್ನು ಮುಕ್ಕು ತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬುವರು ರಾಜಾಜ್ಞೆಯಂತೆ ಬರೆದಿದ್ದಾರೆ.ಲಿಪಿ ಮತ್ತು ಭಾಷೆಯ ಆಧಾರದ ಮೇಲೆ ಇದು ಬಹುಶಃ ಕ್ರಿ. ಶ. 16ನೇ ಶತಮಾನದ ಕನ್ನಡದಲ್ಲಿರುವ ತಾಳೆಯೋಲೆ ಗ್ರಂಥವೆನ್ನಬಹುದು.ಶ್ರೀ ರಾಮಾನುಜಾಚಾರ್ಯರ ವಂದನೆಯಿಂದ ಆರಂಭವಾಗುವ ಈ ಗ್ರಂಥದಲ್ಲಿ ಅರಸನ ದಿನ ನಿತ್ಯದ ಕಾರ್ಯಗಳನ್ನು ನಮೂದಿಸಲಾಗಿದೆ.

ಭಾಸ್ಕರ್ (ಎಂ. ಎಸ್)

**ಎಂ. ವಿ. ಸೀತಾರಾಮಯ್ಯ : ಜೀವನ ಮತ್ತು ಸಾಹಿತ್ಯ ಸಾಧನೆ**

ಪು.96 ಬೆಲೆ ರೂ. 50/- 2013

'ರಾಘವ' ಕಾವ್ಯನಾಮದಿಂದಪ್ರಸಿದ್ಧರಾದ ಮೈಸೂರು ವೆಂಕಟದಾಸಪ್ಪ ಸೀತಾರಾಮಯ್ಯನವರು ಆಧುನಿಕ ಕನ್ನಡ ಸಾಹಿತ್ಯವನ್ನು ಶ್ರೀ ಮಂತಗೊಳಿಸಿದ ಸಾಹಿತಿಗಳಲ್ಲಿ ಅಗ್ರಗಣ್ಯರು ಕಾವ್ಯ ಮೀಮಾಂಸೆ ಮತ್ತು ವ್ಯಾಕರಣ ಕ್ಷೇತ್ರಕ್ಕೆ ಅವರ ಕೊಡುಗೆ ಅವಿಸ್ಮರಣೀಯ ಎಂ. ವಿ.ಸೀ. ಅವರ ಶತಮಾನೋತ್ಸವ ಸಂದರ್ಭದಲ್ಲಿ ಅದರ ಕುರಿತದಂತೆ ವಿದ್ವಾಂಸರು, ಹಿತೈಷಿಗಳು ಹಾಗೂ ಶಿಷ್ಯರು ವಿಮರ್ಶಾತ್ಮಕ ಹಾಗೂ ವಿದ್ವತ್ಪೂರ್ಣ ಲೇಖನಗಳನ್ನು ಹಲವಾರು ದಿನ ಪತ್ರಿಕೆ, ಮಾಸ ಪತ್ರಿಕೆ ಇತ್ಯಾದಿಗಳಲ್ಲಿ ಪ್ರಕಟಿಸಿದ್ದರು ಇವುಗಳಲ್ಲಿ ಕೆಲವನ್ನ ಆಯ್ಕೆ ಮಾಡಿ, ಪ್ರಸ್ತುತ ಕೃತಿಯಲ್ಲಿ ಸಂಕಲಿಸಲಾಗಿದೆ ಅಂತಿಮ ಅಧ್ಯಾಯದಲಿ ನೀಡಿರುವ ಎಂ. ವಿ.ಸೀ ಅವರ ಜೀವನ ಪಥ, ಸಾಹಿತ್ಯ ಕೃಷಿಯ ವಿವರಳು ಕನ್ನಡ ಸಾಹಿತ್ಯ ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ ಬಹುಉಪಯುಕ್ತ ಆಕರ ವಿವರಣೆ.

## ಹಸ್ತಪ್ರತಿ ವಿಭಾಗ

ಹಸ್ತಪ್ರತಿ ವಿಭಾಗವು ಪ್ರತಿಷ್ಠಾನದಲ್ಲಿ ಸತತವಾಗಿ ಕಾರ್ಯನಿರತವಾಗಿರುತ್ತದೆ. ನಮ್ಮಲ್ಲಿರುವ ಅಪಾರ ಸಂಖ್ಯೆಯ ಹಸ್ತಪ್ರತಿಗಳಿಗೆ ಸಂಬಂಧಿಸಿದಂತೆ ಹಲವಾರು ಚಟುವಟಿಕೆಗಳನ್ನು ನಿರಂತರವಾಗಿ ನಡೆಸಿಕೊಂಡು ಬರಲಾಗುತ್ತಿದೆ. 2015ರ ಫೆಬ್ರವರಿ ಹಾಗೂ ಮಾರ್ಚ್ ತಿಂಗಳುಗಳಲ್ಲಿ 21 ಗ್ರಂಥಗಳ ಶುಷ್ಕ ಶುದ್ಧೀಕರಣ, 55 ಗ್ರಂಥಗಳಿಗೆ ತೈಲ ಲೇಪನ, 16 ಗ್ರಂಥಗಳಿಗೆ ಮಸಿ ಲೇಪನ, 64 ಗ್ರಂಥಗಳಲ್ಲಿ ಪತ್ರಗಳ ಜೋಡಣೆ ಮತ್ತು ಸ್ಕ್ಯಾನ್ ಮಾಡಲು ಸಿದ್ಧಪಡಿಸಿರುವುದು, 85 ಗ್ರಂಥಗಳನ್ನು ಸ್ಕ್ಯಾನ್ ಮಾಡಿರುವುದು, 114 ಗ್ರಂಥಗಳಿಗೆ ಸೂಚಿಗಳನ್ನು ತಯಾರಿಸಿರುವುದು, 23 ಗ್ರಂಥಗಳಿಗೆ ಅಟ್ಟೆ ಕಟ್ಟಿರುವುದು ಮತ್ತು 3 ಗ್ರಂಥಗಳಿಗೆ ಬಟ್ಟೆ ಕಟ್ಟಿರುವುದು ಈ ಎಲ್ಲಾ ಕೆಲಸಗಳನ್ನು ಮಾಡಿರಲಾಗಿರುತ್ತದೆ. ಇಬ್ಬರು ಮೂವರು ಸಿಬ್ಬಂದಿಗಳು ಹಾಗೂ ಕೆಲ ಸ್ವಯಂಪ್ರೇರಿತರ ಶ್ರಮದಿಂದ ಈ ಚಟುವಟಿಕೆಗಳನ್ನು ಸಾಧಿಸಲಾಗಿದೆ. ಮಾನ್ಯ ಸದಸ್ಯರಿಗೆ ತಿಳಿದಿರಬಹುದಾದಂತೆ ಹಸ್ತಪ್ರತಿಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಅತ್ಯುತ್ತಮ ರೀತಿಯಲ್ಲಿ ನಡೆಸುತ್ತಿರುವ ಸಂಸ್ಥೆಗಳ ಪೈಕಿ ನಮ್ಮ ಪ್ರತಿಷ್ಠಾನ ಒಂದು ಪ್ರಮುಖ ಸಂಸ್ಥೆಯಾಗಿರುತ್ತದೆ.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ತ್ರೈ ಮಾಸಿಕ ಕಾರ್ಯಕಾರಿ ಸಭೆ

ದಿನಾಂಕ 18ನೇ ಮಾರ್ಚ್ 2015 ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದತ್ರೈ ಮಾಸಿಕ ಕಾರ್ಯಕಾರಿ ಸಭೆ ನಡೆಯಿತು.ಕಾರ್ಯಕಾರಿ ಸಮಿತಿ ಸದಸ್ಯರು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಕಾರ್ಯ ಚಟುವಟಿಕೆಗಳ ಅವಲೋಕನ ಮಾಡಿ ಪದಾಧಿಕಾರಿಗಳಿಗೆ ಉಪಯುಕ್ತ ಸಲಹೆ ಸೂಚನೆಗಳನ್ನು ನೀಡಿದರು.ಕಚೇರಿಯ ಕೆಲಸದ ವೇಳೆ ಬದಲಾವಣೆ, ಸರ್ಕಾರದಿಂದ ಅನುದಾನ ಪಡೆಯುವುದರ ಬಗ್ಗೆ, ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಕಟ್ಟಡ ನವೀಕರಣ ಇತ್ಯಾದಿ ವಿಷಯಗಳ ಬಗ್ಗೆ ಚರ್ಚೆಗಳನ್ನು ನಡೆಸಿ ನಿರ್ಣಯಗಳನ್ನು ತೆಗೆದುಕೊಳ್ಳಲಾಯಿತು.

## ಬಿಎಂಶ್ರೀ ಕಲಾ ಭವನ

150 ಜನರಿಗೆ ಸ್ಥಳಾವಕಾಶ ಧ್ವನಿ, ಬೆಳಕು, ಪ್ರೊಜೆಕ್ಟರ್ ಸೌಲಭ್ಯಗಳು ಇರುವ ಬಿಎಂಶ್ರೀ ಕಲಾ ಭವನ ಸಾಹಿತ್ಯ – ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಲಭ್ಯವಿದೆ.

ಉಪನ್ಯಾಸ, ವಿಚಾರಗೋಷ್ಠಿ, ಪುಸ್ತಕ ಬಿಡುಗಡೆ, ಕವಿಗೋಷ್ಠಿ, ಸಭೆ, ಸಂವಾದ, ಸಂಗೀತ, ನೃತ್ಯ, ಮುಂತಾದ ವೈವಿಧ್ಯಮಯ ಕಾರ್ಯಕ್ರಮಗಳಿಗೆ ಸಾಹಿತ್ಯಾಸಕ್ತರು, ಸಂಘ ಸಂಸ್ಥೆಗಳು ಪಡೆಯಬಹುದು.

ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

## ಸಾಕ್ಷ್ಯ ಚಿತ್ರ ಪ್ರದರ್ಶನ ಕಾರ್ಯಕ್ರಮಗಳು

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಇತ್ತೀಚೆಗೆ ನೂತನ ಪ್ರೊಜೆಕ್ಟರ್ ನ್ನು ಅಳವಡಿಸಿದ್ದು, ಇನ್ನು ಮುಂದೆ ಪ್ರತಿ ತಿಂಗಳ ಮೂರನೇ ಗುರುವಾರಗಳಂದು ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯ ಬಗ್ಗೆ ಕರ್ನಾಟಕ ವಾರ್ತಾ ಇಲಾಖೆ ಹಾಗೂ ಇತರ ಸಂಸ್ಥೆಗಳು ನಿರ್ಮಾಣ ಮಾಡಿರುವ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶನ ಮಾಡಲಾಗುವುದು. ಸಾಹಿತ್ಯಾಸಕ್ತರು ಈ ಸಾಕ್ಷ್ಯ ಚಿತ್ರ ಪ್ರದರ್ಶನ ಕಾರ್ಯಕ್ರಮಗಳಲ್ಲಿ ಉಪಸ್ಥಿತರಿರಬೇಕೆಂದು ಕೋರುತ್ತೇವೆ.

## ಶಾಶ್ವತ ನಿಧಿ

## ಸಾಹಿತ್ಯಾಸಕ್ತರಲ್ಲಿ ಒಂದು ಬಿನ್ನಹ

ಪ್ರತಿಷ್ಠಾನದ ಮುಂದೆ ಹಸ್ತಪ್ರತಿಗಳ ರಕ್ಷಣೆ, ಡಿಜಿಟೀಕರಣ ಮತ್ತು ಅಧ್ಯಯನ, ಮಾಧ್ಯಮ ಕನ್ನಡ ಬರವಣಿಗೆಯ ಬಗೆಗಿನ ಸ್ನಾತಕೋತ್ತರ ಡಿಪ್ಲೊಮ ತರಗತಿಗಳನ್ನು ನಡೆಸುವುದು, ನಮ್ಮ ಹಿರಿಯ ಸಂಶೋಧಕರ ಬಗ್ಗೆ ಸಾಕ್ಷ್ಯಚಿತ್ರಗಳನ್ನು ತಯಾರಿಸುವ ಯೋಜನೆ, ಮೌಲಿಕ ಪುಸ್ತಕಗಳ ಪ್ರಕಟಣೆ , ಹಳಗನ್ನಡದ ವಿಶೇಷ ಅಧ್ಯಯನಕ್ಕಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸುವುದುಇಂತಹ ಹಲವಾರು ಯೋಜನೆಗಳು ಮುಂದಿವೆ. ಇವಕ್ಕೆಲ್ಲ ಹಣದ ಆವಶ್ಯಕತೆ ಇದೆ.

ಈ ದಿಸೆಯಲ್ಲಿ ಪ್ರತಿಷ್ಠಾನವು ಒಂದು ಶಾಶ್ವತ ನಿಧಿಯನ್ನು ಸ್ಥಾಪಿಸುವ ಆಲೋಚನೆಯಲ್ಲಿದೆ.ಈ ನಿಧಿಯ ಮೇಲಿನ ಬಡ್ಡಿ ಹಣದಿಂದ ನಮ್ಮ ಮುಂದಿನ ಯೋಜನೆಗಳನ್ನು ಕಾರ್ಯಗತ ಗೊಳಿಸುವುದು ನಮ್ಮ ಉದ್ದೇಶವಾಗಿರುತ್ತದೆ. ನಮ್ಮ ಉದ್ದೇಶ ಸಾಕಾರಗೊಳ್ಳಲು ತಮ್ಮಂತಹ ಉದಾರಿಗಳ ನೆರವು ಅಗತ್ಯ

ತಮ್ಮಲ್ಲಿ ವಿಶೇಷವಾಗಿ ಮಾಡುವ ಮನವಿಯೆಂದರೆ, ತಾವು ಉದಾರವಾಗಿ ದಾನದ ರೂಪದಲ್ಲಿ ನಮ್ಮ ಸಂಸ್ಥೆಗೆ ಧನಸಹಾಯ ಮಾಡಬೇಕೆಂದು ತಮ್ಮನ್ನು ಕೋರುತ್ತೇವೆ. ತಮ್ಮಂತಹವರು ನಮ್ಮ ಚಟುವಟಿಕೆಗಳಿಗೆ ಬೆಂಬಲ ನೀಡಿದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರ ಮತ್ತಷ್ಟು ಶ್ರೀಮಂತವಾಗಲು ಸಾಧ್ಯವಾಗಬಹುದಾಗಿರುತ್ತದೆ.

ತಾವು ದತ್ತಿನಿಧಿಗಳನ್ನು ಸ್ಥಾಪಿಸುವ ಮೂಲಕ, ಶಾಶ್ವತ ನಿಧಿಗೆ ಉದಾರವಾಗಿ ಧನಸಹಾಯ ಮಾಡುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳನ್ನು ಖರೀದಿಸುವುದರ ಮೂಲಕ, ಪ್ರತಿಷ್ಠಾನದ ಪ್ರಕಟಣೆಗಳ ಪ್ರಾಯೋಜಕತ್ವವನ್ನು ವಹಿಸಿಕೊಳ್ಳುವುದರ ಮೂಲಕ ಹಲವು ವಿಧಗಳಲ್ಲಿ ನಮ್ಮ ಜೊತೆ ಕೈ ಜೋಡಿಸಬಹುದಾಗಿರುತ್ತದೆ.

ಪ್ರತಿಷ್ಠಾನಕ್ಕೆ ನೀಡುವ ನಿಧಿಯ ಮೊಬಲಗಿನ ಮೇಲೆ ಭಾರತ ಸರ್ಕಾರದ ಆದಾಯ ತೆರಿಗೆ ಕಾನೂನಿನ '80 ಜಿ' ಅನ್ವಯ ತೆರಿಗೆ ವಿನಾಯಿತಿ ದೊರೆಯುತ್ತದೆ.

ತಾವು ತಮ್ಮ ಕಾಣಿಕೆಗಳನ್ನು ಚೆಕ್/ಡಿಡಿ ಮೂಲಕ ಪ್ರತಿಷ್ಠಾನದ ಹೆಸರಿನಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು.

**ಶಾಶ್ವತ ನಿಧಿಗೆ ಮಾರ್ಚ್ 2015 ರಲ್ಲಿ ರೂ. 5000/– ಅಥವಾ ಹೆಚ್ಚು ಕಾಣಿಕೆ ನೀಡಿರುವವರ ಪಟ್ಟಿ**

ಪ್ರೊ. ಆ.ರಾ. ಮಿತ್ರ ರೂ. 10000/–
ಶ್ರೀ ಜಿಎಸ್ ಎಸ್ ರಾವ್ ರೂ. 5000/–
ಶ್ರೀಮತಿ ಎಂ.ಕೆ. ಸುಮಂಗಳ ರೂ. 10,000/–

Regd. with RNI, New Delhi. KARKAN 24541 dated 08.12.2014

# ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಬೆಂಗಳೂರು ಗ್ರಂಥಾಲಯದ ಒಂದು ನೋಟ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದಲ್ಲಿ ಇಂದಿನವರೆಗೆ ಶೇಖರಣೆಯಾದ ಗ್ರಂಥಗಳ ಸಂಖ್ಯೆ 25692 ಹಾಗೂ ನಿಯತಕಾಲಿಕಗಳ ಸಂಖ್ಯೆ 7047. ಈ ಅಮೂಲ್ಯವಾದ ಗ್ರಂಥರಾಶಿಯನ್ನು ವೈಜ್ಞಾನಿಕವಾಗಿ ಸಂಘಟಿಸಿ ಎಲ್ಲ ಪುಸ್ತಕಗಳ ಗಣಕೀಕೃತ ಸೂಚಿಯನ್ನು ತಯಾರಿಸಲಾಗಿದೆ. ಪ್ರತಿಷ್ಠಾನದ ಗ್ರಂಥಾಲಯವು ಎಲ್ಲ ರೀತಿಯಿಂದ ಸುಸಜ್ಜಿತಗೊಂಡಿರುವದರಿಂದ ವಿದ್ವಾಂಸರು, ವಿದ್ಯಾರ್ಥಿಗಳು ಹಾಗೂ ಪ್ರತಿಷ್ಠಾನದ ಎಲ್ಲ ಸದಸ್ಯರು ಇದರ ಸದುಪಯೋಗ ಪಡೆದುಕೋಳ್ಳಬಹುದಾಗಿದೆ.

ಈ ಕೆಳಗೆ ನಮೂದಿಸಿದ ವಿಶೇಷ ಸಂಗ್ರಹ ಲಭ್ಯವಿದೆ

1. ಕನ್ನಡ ಭಾಷೆ,ಕನ್ನಡ ವ್ಯಾಕರಣ ,ಕನ್ನಡ ಪ್ರಾಚೀನ ಹಾಗೂ ಆಧುನಿಕ ಸಾಹಿತ್ಯ
2. ಕನ್ನಡ ವಿದ್ವಾಂಸರಾದ ರೈಸ, ಬಿಎಂಶ್ರೀ.ತೀನಂಶ್ರಿ,ಬೇಂದ್ರೆ, ಡಿವಿಜಿ, ಶಂಬಾ, ಕುವೆಂಪು, ಪುತಿನ, ಶಿವರಾಮ ಕಾರಂತ, ಎಂವಿಸೀ, ಮುಂತಾದವರ ವಿಶೇಷ ಸಂಗ್ರಹ
3. ಕನ್ನಡ ಭಾಷೆ, ಸಂಸ್ಕೃತಿ ಹಾಗು ಕನ್ನಡ ನಾಡಿನ ಹಿರಿಮೆಯನ್ನು ಎತ್ತಿಹಿಡಿಯುವದಕ್ಕಾಗಿ ಮೀಸಲಾದ ಸುಮಾರು 100 ಪುಸ್ತಕಗಳು ಲಭ್ಯವಿವೆ.
4. ರೈಸ್ ಎಪಿಗ್ರಾಫಿಯಾ ಕರ್ಣಾಟಿಕಾ ಸಂಪುಟಗಳು ಹಾಗು ಮೈಸೂರು ವಿಶ್ವವಿದ್ಯಾನಿಲಯದ ಸಂಪುಟಗಳು.

# ಪ್ರತಿಷ್ಠಾನದ ಕಚೇರಿಯ ಕೆಲಸದ ವೇಳೆ ಬದಲಾವಣೆ

ಪ್ರತಿಷ್ಠಾನದ ಕೆಲಸಗಳನ್ನು ಹೆಚ್ಚು ದಕ್ಷತೆಯಿಂದ ಸಾಧಿಸಲು ಹಾಗೂ ಸದಸ್ಯರು ಮತ್ತು ಸಾಹಿತ್ಯಾಸಕ್ತರ ಹೆಚ್ಚಿನ ಅನುಕೂಲಕ್ಕಾಗಿ ದಿನಾಂಕ

1 ನೇ ಏಪ್ರಿಲ್ 2015 ರಿಂದ ಪ್ರತಿಷ್ಠಾನದ ಕಚೇರಿಯ ಕೆಲಸದ ವೇಳೆ ಹೀಗಿರುತ್ತದೆ:

ಸೋಮವಾರದಿಂದ ಶನಿವಾರದವರೆಗೆ ಮಧ್ಯಾನ್ಹ 12.30ರಿಂದ ಸಂಜೆ 7.30 ವರೆಗೆ

ವಾರದ ರಜಾದಿನ : ಭಾನುವಾರ

**Printed and published by : *B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath***



ಅಚ್ಚಾದ ಪುಸ್ತಕ

ತೆರೆದ-ಅಂಚೆ

ಶ್ರೀಮತಿ/ಶ್ರೀ.................................................

.................................................

.................................................

ವಿಳಾಸ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೪೮೭೭